# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

೨ನೇ ವರ್ಷ ಸಂಚಿಕೆ ೫ ಕೊಪ್ಪ ೧೮-೯-೮೩ ಭಾನುವಾರ ಬೆಲೆ ೨೦ ಪೈಸೆ


## ಗ್ರಾಮ ಲೆಕ್ಕಿಗ ಮತ್ತು ಶ್ರೀಮಂತರ ಕೈವಾಡ:
## ಬಡವನ ಹೆಸರಲ್ಲಿ ಸಮೃದ್ಧ ಕಾಡು ಒತ್ತುವರಿ?

ಮೇಗೂರು: ಕೆಲವೇ ವರ್ಷಗಳ ಹಿಂದೆ ಅಕ್ಷಯವಾದುದೆಂದು ನಂಬಲಾಗಿದ್ದ ನಮ್ಮ ಜಿಲ್ಲೆಯ ಅಸಾಧಾರಣ ಅರಣ್ಯ ಸಂಪತ್ತು ಕಾಫಿ ತೋಟಕ್ಕಾಗಿ (ಮುಖ್ಯವಾಗಿ) ವೇಗವಾಗಿ ನಶಿಸುತ್ತಿದೆ. ಇದರ ಒಂದು ಮಾದರಿಯ ಬಗ್ಗೆ ಇಲ್ಲಿನ ಜನ ಜಿಲ್ಲಾಧಿಕಾರಿಗಳಿಗೆ ದೂರಿತ್ತಿದ್ದಾರೆ.

ಮೇಗುಂದಾ ಹೋಬಳಿಯ ಹರಳಾನೆ ಗ್ರಾಮದ ಸ. ನಂ. ೯೩. ೯೪ ರಲ್ಲಿ ಕೃಷ್ಣ ದೇವಾಡಿಗ ಎಂಬಾತ ಈ ವರ್ಷದ ಜೂನ್ ತಿಂಗಳಿಂದೀಚೆಗೆ ಸುಮಾರು ೧೫-೨೦ ಎಕರೆ ಸರ್ಕಾರಿ ಕಾಡಿಗೆ ಬೇಲಿ ಹಾಕಿ, ಬೇಲಿಯಿಂದ ಸುಮಾರು ೨೦ ಅಡಿಗಳ ಒಳಗಿನವರೆಗೆ(ಸುತ್ತಲೂ) ಕಾಫಿ ಗಿಡ ನೆಟ್ಟಿದ್ದು, ಅದನ್ನು ೧೯೭೪ ಕ್ಕಿಂತ ಹಿಂದೆಯೇ ಮಾಡಿದ ಬಗರ್ ಹುಕುಂ ನಾಟಿ ಎಂದು ತೋರಿಸಿ, ತಕರಾರು ತಃಖ್ತೆ (ಟಿ.ಟಿ.)ಮೂಲಕ ಈ ಭೂಮಿಯನ್ನು ಆತನಿಗೆ ಕೊಡಿಸುವ ಪ್ರಯತ್ನ ನಡೆದಿದೆಯೆಂದು ದೂರಲಾಗಿದೆ.

### ಕೈವಾಡ-ಕುಮ್ಮಕ್ಕು

ಈ ಕಾಡಿನಲ್ಲಿ, ಚಕ್ಕನ ಹಾಡ್ಯ ಮಂಜಪ್ಪಯ್ಯ ಎಂಬವರಿಗೆ ೩೨ ಗುಂಟೆ ಜಾಗ ಮಂಜೂರಾಗಿದ್ದು ಅದರ ಸಾಗುವಳಿ ಚೀಟಿ ಕೂಡ ಬಿಡುಗಡೆಯಾಗಿದೆ. ಆದರೆ ಕೃಷ್ಣ ದೇವಾಡಿಗ ಆ ಜಾಗವನ್ನೂ ಸೇರಿಸಿ ಬೇಲಿ ಹಾಕಿಕೊಂಡಿದ್ದಾರೆ. ಆತನಿಗೆ ಬೇರೆ ಕಡೆ ಇರುವ ಸ್ವಲ್ಪ ಜಮೀನಿನ ಅಕ್ಕ ಪಕ್ಕ ಒತ್ತುವರಿ ಮಾಡಿ ಕಾಫಿ ಬೆಳೆಸಲು ಬೇಕಾದಷ್ಟು ಜಾಗವಿದ್ದರೂ ಗ್ರಾಮಸ್ಥರಿಗೆಲ್ಲ ತೊಂದರೆಯಾಗುವ ರೀತಿ ಈ ಜಾಗವನ್ನು ಆತ ಒಳಗೆ ಹಾಕಲು ಪ್ರಯತ್ನಿಸುತ್ತಿರುವುದರಲ್ಲಿ ಸ್ಥಳೀಯ ಕಾಫಿ ತೋಟದ ಪ್ರಭಾವಿ ಶ್ರೀಮಂತರೊಬ್ಬರ ಹಾಗೂ ಗ್ರಾಮ ಲೆಕ್ಕಿಗರ ಕೈವಾಡ ಇದೆಯೆಂದು ಹೇಳಲಾಗಿದೆ. ಅಲ್ಲದೆ ಈ ಕಾಡಿನಲ್ಲಿ ವಿಪುಲವಾಗಿ ಉತ್ತಮವಾದ ನಾಟಾ ಜಾತಿ ಮರಗಳಿದ್ದು, ಅವು ಲೂಟಿಯಾಗುವುದಲ್ಲದೆ ಗ್ರಾಮಸ್ಥರಿಗೆ ಗೋಮಾಳ ಮತ್ತು ಸೊಪ್ಪಿನ ಬೆಟ್ಟಗಳಿಗೂ ಸಂಚಕಾರ ಬರುವುದರಿಂದ, ಈ ಅಕ್ರಮ ಒತ್ತುವರಿಯನ್ನು ಕೂಡಲೇ ಖುಲ್ಲಾ ಮಾಡಿಸಬೇಕೆಂದೂ ಗ್ರಾಮಸ್ಥರು ಜಿಲ್ಲಾಧಿಕಾರಿಗಳನ್ನು ಕೋರಿದ್ದಾರೆ, ಹಾಗೂ ಶಾಸಕರ ಗಮನಕ್ಕೂ ಈ ವಿಷಯ ತಂದಿದ್ದಾರೆ.

ಈಗಾಗಲೇ ಇದರಲ್ಲಿ ೫ ಎಕ್ರೆಗೆ ಟಿ. ಟಿ. ಕಂದಾಯ ಮಂಜೂರ್ಮಾಡಲ್ಪಟ್ಟಿದೆಯೆಂದು ತಿಳಿದುಬಂದಿದ್ದು, ಜಿಲ್ಲಾಧಿಕಾರಿಗಳು ಕೂಡಲೇ ಸ್ಥಳ ಪರಿಶೀಲನೆ ನಡೆಸಿ ಸೂಕ್ತ ಕ್ರಮ ತೆಗೆದುಕೊಳ್ಳಬೇಕಾಗಿದೆ.

## ಹೊಲಿಗೆ ಶಿಕ್ಷಣ ಪರೀಕ್ಷೆ

ಚಿಕ್ಕಮಗಳೂರು: ೧೯೮೪ ನೇ ಏಪ್ರಿಲ್–ಮೇ ತಿಂಗಳಲ್ಲಿ ನಡೆಯುವ ಕ್ರಾಫ್ಟ್ ಕೋರ್ಸ್ ಇನ್ ಟೈಲರಿಂಗ್ ಪರೀಕ್ಷೆಗೆ ೩೦-೯-೮೩-ರೊಳಗಾಗಿ ಕಟ್ಟಬೇಕಾಗಿದ್ದು, ಹೆಚ್ಚಿನ ವಿವರಗಳನ್ನು ನೆಹರು ಯುವಜನ ಕೇಂದ್ರ, ಚಿಕ್ಕಮಗಳೂರು – ಇಲ್ಲಿಂದ ಪಡೆಯಬಹುದಾಗಿದೆ.

## ಲ್ಯಾಪ್ರೊಸ್ಕೋಪಿಕ್ ಶಿಬಿರ

ಬಸರಿಕಟ್ಟೆ: ಇಲ್ಲಿ ಸೆ. ೨೨ ರಂದು ಉದರದರ್ಶಕ ಶಸ್ತ್ರಚಿಕಿತ್ಸಾ ಶಿಬಿರ ಏರ್ಪಡಿಸಿದೆ. ಎಲ್ಲ ಸೌಕರ್ಯಗಳನ್ನು ಒದಗಿಸಿದ್ದು, ಅರ್ಹ ಮಹಿಳೆಯರು ಪ್ರಯೋಜನ ಪಡೆಯಬೇಕೆಂದು ಕೋರಲಾಗಿದೆ.

## ಆಟಕ್ಕುಂಟು, ಲೆಕ್ಕಕ್ಕಿಲ್ಲದ ಉತ್ತಮೇಶ್ವರದ ಸರ್ಕಾರಿ ಆಸ್ಪತ್ರೆ

(ವಿಶೇಷ ಪ್ರತಿನಿಧಿಯಿಂದ)

ಉತ್ತಮೇಶ್ವರ: ಇಲ್ಲಿ ೮–೧೧ ತಿಂಗಳ ಹಿಂದೆ ಆರಂಭವಾದ ಸರ್ಕಾರಿ ಆಸ್ಪತ್ರೆ ಆಟಕ್ಕುಂಟು, ಲೆಕ್ಕಕ್ಕಿಲ್ಲ ಎಂಬ ಮಕ್ಕಳ ಆಟದಂತಾಗಿದೆ.

### ಸಿಬ್ಬಂದಿಯೇ ಇಲ್ಲ

ಆರಂಭದಿಂದಲೂ ಇಲ್ಲಿಗೆ ವೈದ್ಯರ ನೇಮಕ ಆಗಿಲ್ಲ. ಮೊದಲಿಗೆ ಕೊಪ್ಪದ ವೈದ್ಯಾಧಿಕಾರಿಗಳು ವಾರಕ್ಕೆ ೨ ದಿನ ಭೇಟಿ ಕೊಡುತ್ತಿದ್ದರು. ಈಗ ಜಯಪುರದ ಸ॥ ವೈದ್ಯರಿಗೆ ಇಲ್ಲಿನ ಜವಾಬ್ದಾರಿ ವಹಿಸಲಾಗಿದೆ. ಆದರೆ ಅವರ ತಲೆಯ ಮೇಲಿರುವ ಇತರ ಹಲವು–ಹನ್ನೊಂದು ಜವಾಬ್ದಾರಿಗಳ ಮಧ್ಯೆ(ಇನ್ನೂ ೨-೩ ಆಸ್ಪತ್ರೆ ಜವಾಬ್ದಾರಿಯೂ ಇದೆಯಂತೆ) ಇಲ್ಲಿಗೆ ಕ್ರಮವಾಗಿ ಭೇಟಿ ನೀಡುವುದು ಅಸಾಧ್ಯವಾಗಿದೆ.

ಮೊದಲಿಗೆ ಇಬ್ಬರು ದಾದಿಯರಿದ್ದು, ಒಬ್ಬರು ಆಸ್ಪತ್ರೆಯ ಕೆಲಸವನ್ನೂ ಇನ್ನೊಬ್ಬರು ಹಳ್ಳಿಗಳ ತಿರುಗಾಟವನ್ನೂ ನೋಡಿಕೊಳ್ಳುತ್ತಿದ್ದರು. ಆದರೆ ಈಚೆಗೆ ಅವರಲ್ಲೊಬ್ಬರು ಬೇರೆ ಕಡೆ ವರ್ಗಮಾಡಿಸಿಕೊಂಡಿದ್ದು, ಇನ್ನೊಬ್ಬರಿಗೆ ಯಾವ ಕೆಲಸವನ್ನೂ ಸರಿಯಾಗಿ ನಿರ್ವಹಿಸುವುದು ಅಸಾಧ್ಯವಾಗಿದೆ.

### ಮುಗಿದ ಔಷಧಿ

ಆಸ್ಪತ್ರೆ ಪ್ರಾರಂಭದಲ್ಲಿ ಸುಮಾರು ೫ ಸಾವಿರ ರೂ. ಗಳ ಔಷಧ ಸಾಮಗ್ರಿಗಳು ಸರಬರಾಜಾಗಿದ್ದವು. ಅವುಗಳಲ್ಲಿ ಹೆಚ್ಚಿನವು ಈಗಾಗಲೇ ಖಾಲಿಯಾಗಿವೆ. ಈಚೆಗೆ ಭೇಟಿ ನೀಡಿದ್ದ ಜಿಲ್ಲಾ ಆರೋಗ್ಯ ಸಹಾಯಕ ನಿರ್ದೇಶಕರು ಇಲ್ಲಿಗೆ ಒಬ್ಬ ವೈದ್ಯರ ನೇಮಕವಾಗಿದೆ ಹಾಗೂ ಇನ್ನೂ ೫ ಸಾವಿರ ರೂ. ಔಷಧ ಒದಗಿಸಲಾಗುತ್ತದೆ ಎಂದಿದ್ದರು. ಆದರೆ ನೇಮಕವಾದ ವೈದ್ಯರು ಸೀದಾ ಬೇರೆ ಕಡೆಗೆ ವರ್ಗ ಮಾಡಿಸಿಕೊಂಡರೆಂದು ಸುದ್ದಿ. ಔಷಧವಂತೂ ಬರಲೇ ಇಲ್ಲ.

### ಕಟ್ಟಡ ಇಲ್ಲ

ಪಂಚಾಯ್ತಿಯವರು ಎರವಲು ಕೊಟ್ಟಿರುವ ಕಟ್ಟಡದಲ್ಲಿ ನಡೆಯುತ್ತಿರುವ ಈ ಆಸ್ಪತ್ರೆಗಾಗಿ ಕಂದಾಯ ಇಲಾಖೆ ೫ ಎಕರೆ ಭೂಮಿ ಮಂಜೂರು ಮಾಡಿದೆ. ಅಲ್ಲಿ ಕಟ್ಟಡ ಕಟ್ಟುವ ಜವಾಬ್ದಾರಿ ವಹಿಸಲಾಗಿರುವ ಸಾರ್ವಜನಿಕ ಕಾಮಗಾರಿ ಇಲಾಖೆ ಆ ಬಗ್ಗೆ ಏನು ಮಾಡಿದೆಯೆಂಬುದು ತಿಳಿದುಬಂದಿಲ್ಲ. ಏನು ಮಾಡಿರುವುದೂ ಕಾಣುವುದೂ ಇಲ್ಲ.

ಈ ಸುತ್ತ ಮುತ್ತಲ ಹತ್ತಾರು ಹಳ್ಳಿಗಳ ಜನ ಸಣ್ಣ ಕಾಯಿಲೆಗೂ ೮–೧೦ ಮೈಲು ಹೋಗಬೇಕಾಗಿದೆ. ಇದ್ದೂ ಇಲ್ಲವಾಗಿರುವ ಈ ಆಸ್ಪತ್ರೆಯ ಬಗ್ಗೆ ಇಲಾಖಾಧಿಕಾರಿಗಳಿಗೂ ಶಾಸಕರಿಗೂ ಮಾಡಿರುವ ಮನವಿಗಳ ಲೆಕ್ಕವೇ ತಪ್ಪಿಹೋಗಿದೆ.

ರಾಜಕೀಯ ಬಿಸಿ ತುತ್ತ ತುದಿಯಲ್ಲಿದ್ದಾಗ ಅದರ ಒಂದು ಪರಿಣಾಮವಾಗಿ ಹುಟ್ಟಿದ ಈ 'ಅಕಾಲ ಶಿಶು'ವನ್ನು ಸರ್ಕಾರಿ ಆಸ್ಪತ್ರೆ ಎನ್ನುವುದಕ್ಕಿಂತ 'ರಾಜಕೀಯ ಆಸ್ಪತ್ರೆ' ಎಂದರೆ ಹೆಚ್ಚು ಉಚಿತವಾದೀತು. 'ರಾಜಕೀಯ ಸಂತ್ರಸ್ತ ಆಸ್ಪತ್ರೆ' ಎನ್ನಲೂ ಅಡ್ಡಿಯಿಲ್ಲ!

## ಅನಾರೋಗ್ಯಕರ ಮೀನು ಮಾರ್ಕೆಟ್ : ದೂರು; ಕ್ರಮದ ಭರವಸೆ

ಕೊಪ್ಪ: ಇಲ್ಲಿನ ಮೀನು ಮಾರುಕಟ್ಟೆಯಲ್ಲಿ ಈ ವಾರ ಹುಳು ಬಿದ್ದಿದ್ದ ಬೂತಾಯಿ ಮೀನುಗಳನ್ನು ಮಾರಲಾಯಿತೆಂದೂ, ಇತರೆ ಮೀನುಗಳನ್ನು ಸಹ ಹಲವಾರು ಸಂತೆಗಳಲ್ಲಿಟ್ಟು ಮಾರಿ ಉಳಿದುದನ್ನೂ ಹೊಸದನ್ನೂ ಒಟ್ಟಿಗೆ ಸೇರಿಸಿ ಇಲ್ಲಿಗೆ ತರುವುದರಿಂದ ಅವೂ ಒಳ್ಳೆ ರೀತಿಯಲ್ಲಿರುವುದಿಲ್ಲ ಎಂದೂ ಕೆ. ಬಾಬು ಶೆಟ್ಟಿ ಮತ್ತು ಇತರ ಕೆಲವರು ಪತ್ರಿಕೆಗೆ ದೂರಿದ್ದರು.

ಕನ್ನಡ ಜಿಲ್ಲೆಯಲ್ಲಿ, ಕೆಲವೊಮ್ಮೆ ಮೀನುಗಳಿಗೆ ಹೀಗೆ ಆಕಸ್ಮಾತ್ತಾಗಿ ಹುಳು ಬಿದ್ದಾಗ ಅಧಿಕಾರಿಗಳು ಅವನ್ನು ವಶಪಡಿಸಿಕೊಂಡು ಹೂಳುವ ಚಾಲ್ತಿಯಿದೆಯೆಂದೂ, ಮೀನು ಮಾಂಸಗಳನ್ನು ಮಾರುವ ಮೊದಲು ವೈದ್ಯಾಧಿಕಾರಿಗಳಿಂದ ಅದರ ಶುದ್ಧತೆಯ ಬಗ್ಗೆ ಪ್ರಮಾಣೀಕರಿಸಲ್ಪಟ್ಟಿರಬೇಕೆಂದೂ ಹೇಳಲಾಗಿದೆ.

ಈ ಬಗ್ಗೆ ಪುರಸಭೆಯ ಆರೋಗ್ಯ ಪರಿವೀಕ್ಷಕರಾದ ಗುಂಡಾಚಾರ್ ಅವರನ್ನು ವಿಚಾರಿಸಿದಾಗ, ಈ ಬಗ್ಗೆ ತಾವು ಕೂಡಲೇ ಪರಿಶೀಲಿಸಿ ತಪ್ಪಿತಸ್ಥರಿಗೆ ದಂಡ ವಿಧಿಸುವುದಲ್ಲದೆ, ಮುಂದೆ ಹೀಗಾಗದಂತೆ ಕ್ರಮ ತೆಗೆದುಕೊಳ್ಳುವುದಾಗಿಯೂ ಭರವಸೆ ಕೊಟ್ಟಿದ್ದಾರೆ. ಇದಲ್ಲದೆ, ಹಲವು ಹೋಟೇಲುಗಳು ಮುಂತಾದ ಕಡೆಗಳಲ್ಲಿ ಸಹ ನೈರ್ಮಲ್ಯ ಕಾಪಾಡುವ ಬಗ್ಗೆ ತಾವು ನೋಟೀಸು ಜಾರಿ ಮಾಡಿ ಕ್ರಮ ತೆಗೆದ.ಕೊಳ್ಳುತ್ತಿರುವುದಾಗಿ ತಿಳಿಸಿದ್ದಾರೆ.

## ಕಾಡು ಕಳ್ಳರ ಬಂಧನ

ಕೊಪ್ಪ: ಬಾಳೆಹೊನ್ನೂರಿಗೆ ಸಮೀಪದ ಕಾಡುಶಿಕ್ಷೆ ಎಂಬಲ್ಲಿ ನಂದಿ ಮರ ಕಡಿದು ಕೊಯ್ತ ಮಾಡುತ್ತಿದ್ದ ೪ ಜನರನ್ನು ಕೊಪ್ಪ ಅರಣ್ಯ ವಿಭಾಗದ ಸಿಬ್ಬಂದಿ ಬಂಧಿಸಿ ನ್ಯಾಯಾಲಯಕ್ಕೆ ಹಾಜರು ಪಡಿಸಿದ್ದಾರೆ. ಈ ಸಂಬಂಧದಲ್ಲಿ ಬಾಳೆಹೊನ್ನೂರಿನ ಸೈಯದ್ ಅಲಿ ಮತ್ತು ಕಾಡುಶಿಕ್ಷೆಯ ಚಿನ್ನೇಗೌಡ ಎಂಬವರ ಕೈವಾಡವಿದೆ ಎಂದು ತಿಳಿದು ಬಂದಿದ್ದು ತನಿಖೆ ನಡೆಯುತ್ತಿರುವುದಾಗಿ ವಿಭಾಗ ಅರಣ್ಯಾಧಿಕಾರಿ ಕೆ .ಸುಂದರ ನಾಯ್ಕ್ ತಿಳಿಸಿದ್ದಾರೆ.

## ಪತ್ರಕರ್ತನಿಗೆ ಅವಾಚ್ಯವಾಗಿ ಬೈದು ಹಲ್ಲೆಯ ಬೆದರಿಕೆ

ಅಗಳಗಂಡಿ: 'ಶೃಂಕೊನ' ಪತ್ರಿಕೆಯಲ್ಲಿ ಪ್ರಕಟವಾದ ಉತ್ತಮೇಶ್ವರ ಶಾಲೆಯ ಬಗೆಗಿನ ವರದಿಯೊಂದಕ್ಕೆ ಪ್ರತಿಕ್ರಿಯೆಯಾಗಿ ಆ ಶಾಲೆಯ ಅಧ್ಯಾಪಕ ರಾಜಪ್ಪ ಎಂಬವರು ವರದಿಗೆ ಸಂಬಂಧ ಪಡದಿರುವ ಇಲ್ಲಿನ ಸ್ಥಳೀಯ ಪತ್ರಕರ್ತ ಕಲಬಿ ಶ್ರೀನಿವಾಸ್ ಅವರನ್ನು ಅವಾಚ್ಯವಾಗಿ ಬೈದು ಹಲ್ಲೆಯ ಬೆದರಿಕೆ ಹಾಕಿದ್ದಾಗಿಯೂ, ಈ ಬಗ್ಗೆ ಪೋಲೀಸರಿಗೆ ದೂರು ನೀಡಿರುವುದಾಗಿಯೂ ಶ್ರೀನಿವಾಸ್ ತಿಳಿಸಿದ್ದಾರೆ.

## ಸತ್ತವರಿಗೂ ಟೆಲಿಫೋನ್!?

ಕೊಪ್ಪ: ಇಲ್ಲಿ ಹಿಂದೆ ಬದುಕಿದ್ದು ಈಗಿಲ್ಲದವರೂ ತಮ್ಮ ಟೆಲಿಫೋನ್‌ಗಳನ್ನು ಹಿಂದಕ್ಕೆ ಕೊಡದೆ ತಾವೇ ಉಳಿಸಿಕೊಂಡ ಕೆಲವು ಪ್ರಕರಣಗಳಿವೆ ಎನ್ನಲಾಗಿದೆ! 'ಅಲ್ಲಿ' ನೆಲೆಸಿರುವ ಅವರ 'ಇಲ್ಲಿನ' ಪ್ರತಿನಿಧಿಗಳ (ವಾರಸುದಾರರ) ಹೆಸರಿಗೆ ಅದನ್ನು ವರ್ಗಾಯಿಸುವುದಾಗಲೀ, ಹಿಂದಕ್ಕೆ ಪಡೆಯುವುದಾಗಲೀ ತಮಗೆ ಸೂಕ್ತ ಕಂಡಂತೆ ಮಾಡುವಂತೆ ಇಲಾಖಾ ಮೇಲಧಿಕಾರಿಗಳಿಗೆ ವರದಿ ಹೋಗಿದ್ದರೂ ಇನ್ನೂ ಕ್ರಮ ಇಳಿದು ಬರದೆ ಇಲಾಖಾ ಬೊಕ್ಕಸಕ್ಕೆ ದಕ್ಕಬಹುದಾದ ಕಂದಾಯ ಸಂದಾಯವಾಗುವುದು ತಪ್ಪಿದೆಯೆನ್ನಲಾಗಿದೆ.

'ಮುಂಜಾವು'ಗೆ

ಚಂದಾದಾರರಾಗಿ

ಶೃಂಗೇರಿಯಲ್ಲಿ ನೀರು-ಹಾಲು:

# ಮಾರಿಯುವರ ನಿಲುವು ಮಂಡನೆ

ಓದುಗರ ಪತ್ರ ವಿವಾದ:

'ಮುಂಜಾವು' ಸಂಪಾದಕರಲ್ಲಿ,

ಮಾನ್ಯರೆ,

ನಿಮ್ಮ ಪತ್ರಿಕೆಯಲ್ಲಿ (ತಾ:೪-೯-೮೩) ಪ್ರಕಟವಾದ **"ಶೃಂಗೇರಿಯಲ್ಲಿ ಹಾಲಿನ ಸಮಸ್ಯೆ ನಿವಾರಿಸಿ"** ಎಂಬ ಹೇಳಿಕೆಯನ್ನು ಓದಿದೆವು.

ಹಲವೆಡೆ ೧ ಬಕೆಟ್ **ನೀರಿಗೇ ೨ ರೂ.** ಗಳಿಂದ ೫ ರೂ. ಗಳವರೆಗೆ ಇರುವಂತಹ ಕಾಲ ಇದು. ಹೀಗಿರುವಾಗ ಒಂದು ಲೀಟರ್ ಹಾಲನ್ನು ಮನೆ ಬಾಗಿಲಿಗೆ ತೆಗೆದುಕೊಂಡು ಹೋಗಿ ಕೊಟ್ಟಾಗ್ಯೂ ಸಹ ಕೊಡುವುದು ಎರಡೇ ರೂಪಾಯಿ ಶೃಂಗೇರಿಯಲ್ಲಿ. 'ಒಳ್ಳೆಯ ಹಾಲು ಕೊಡುತ್ತೇವೆ, ೨.೫೦ ಅಥವಾ ೩ ರೂ. ಗಳನ್ನು ಕೊಡಿ' ಎಂದರೆ **"ನಿಮ್ಮ ಹಾಲು ನನಗೆ ಬೇಡ. ಬೇರೆಯವರ ಹತ್ತಿರ ತೆಗೆದುಕೊಳ್ಳುತ್ತೇನೆ"** ಎನ್ನುವ ಗೃಹಿಣಿಯರೇ ಜಾಸ್ತಿ.

ಒಂದು ಸಾಮಾನ್ಯ ಎಮ್ಮೆ ಖರೀದಿಸಲು ೨೦೦೦ ದಿಂದ ೨,೫೦೦ ರೂಪಾಯಿಗಳು, ೧ ಕಟ್ಟು ಹುಲ್ಲಿಗೆ ೭೫ ಪೈಸೆಯಿಂದ ೧ ರೂ. ಹಿಂಡಿ ಕಿಲೋ ಒಂದರ ರೂ. ೧-೨೦ ರಿಂದ ೨-೮೦, ತೌಡು ರೂ. ೧-೨೫ ರಿಂದ ೧-೫೦ ಮತ್ತು ಕೂಲಿ ವಗೈರೆ ಖರ್ಚುಗಳೆಲ್ಲಾ ಸೇರಿ ಒಂದು ಲೀಟರ್ ಹಾಲಿನ ಬೆಲೆಯನ್ನು ಈ ಗೃಹಿಣಿಯರು ಲೆಕ್ಕ ಹಾಕಬಲ್ಲರೆ?

ಡೈರಿ ಮಾಲಿಕರಲ್ಲಿ ನನ್ನದೊಂದು ಮನವಿ: ಇನ್ನಾದರೂ ನೀವುಗಳು ಒಂದಾಗಿ ಸೇರಿ (ಸಂಘಟನೆಯಾಗಿ) ಹಾಲಿಗೆ ಉತ್ತಮ ಬೆಲೆ ನಿಗದಿಪಡಿಸಲು ಯುಕ್ತಿಯುಕ್ತರಾಗಿ ನಂಬಿದ್ದೇನೆ.

**—ನೊಂದ ಡೈರಿ ಮಾಲಿಕ, ಶೃಂಗೇರಿ.**

[ಸದರಿ ದೂರಿನ ಬಗ್ಗೆ ಶೃಂಗೇರಿ ಪುರಸಭೆಯ ಆರೋಗ್ಯ ಪರಿವೀಕ್ಷಕ ವೆಂಕಟೇಶ ಸುಬ್ರಮಣ್ಯ ಸ್ಪಷ್ಟೀಕರಣವೊಂದನ್ನು ನೀಡಿದ್ದಾರೆ. ಅದರ ಪ್ರಕಟಣೆ ಮುಂದಿನ ಸಂಚಿಕೆಯಲ್ಲಿ. **—ಸಂ.**]

## ಜಿಲ್ಲಾ ಲೇಖಕರ ಸಂಘದ ಸರ್ವ ಸದಸ್ಯರ ಸಭೆ

ತಾ|| ೧೮-೯-೮೩ ಭಾನುವಾರ ಬೆಳಿಗ್ಗೆ ೧೧ ಗಂಟೆಗೆ ಚಿಕ್ಕಮಗಳೂರಿನ ಎಂ. ಈ. ಎಸ್. ಶಾಲೆಯಲ್ಲಿ ಜಿಲ್ಲಾ ಲೇಖಕರ ಸಂಘದ ಸರ್ವ ಸದಸ್ಯರ ಸಭೆಯನ್ನು ಕರೆಯಲಾಗಿದೆ. ಈ ಬಗ್ಗೆ ಸಂಘದ ಸದಸ್ಯರಿಗೆ ಪತ್ರ ಮುಖೇನ ತಿಳಿಸಲಾಗಿದೆ. ಒಂದು ವೇಳೆ ತಲುಪದಿದ್ದಲ್ಲಿ ಇದನ್ನೇ ಆಹ್ವಾನವೆಂದು ಮನ್ನಿಸಿ, ಸದಸ್ಯರೆಲ್ಲಾ ತಪ್ಪದೆ ಹಾಜರಾಗಬೇಕೆಂದು ಸಂಘದ ಅಧ್ಯಕ್ಷರು ಕೋರಿದ್ದಾರೆ.

## ಉದ್ಘಾಟನೆ ಆದ ಹೊಸ ಕಟ್ಟಡಕ್ಕೆ ಬೀಗ

ಬೆಳವಿನಕೊಡಿಗೆ: ಇಲ್ಲಿನ ಪ್ರತಿಭಾ ಮಹಿಳಾ ಸಮಾಜದ ಹೊಸ ಕಟ್ಟಡವನ್ನು ಶಾಸಕ ಗೋವಿಂದೇ ಗೌಡರು ಬಿ.ಜಿ.ಚಿದಂಬರ್ ಅಧ್ಯಕ್ಷತೆಯಲ್ಲಿ ಸೆ. ೧೧ ರಂದು ಉದ್ಘಾಟಿಸಬೇಕಿತ್ತು. ನಾಟಕ ಇತ್ಯಾದಿಗಳೂ ಇದ್ದುದರಿಂದ ಸುಮಾರು ೫೦೦ ಜನ ಕಾದಿದ್ದರು. ಆದರೆ ಶಾಸಕರಾಗಲೀ ಅಧ್ಯಕ್ಷರಾಗಲೀ ಬರದಿದ್ದುದರಿಂದ ಕಡೆಗೆ ಜಿಲ್ಲಾ ಪತ್ರಕರ್ತ ಬಿ. ಎಸ್. ಶೇಷಾದ್ರಿ ಅಧ್ಯಕ್ಷತೆಯಲ್ಲಿ ಮಹಿಳಾ ಸಮಾಜದ ಅಧ್ಯಕ್ಷೆ ಬಿ. ಆರ್. ಚಂದ್ರಮತಿ ಉದ್ಘಾಟಿಸಿದರು. ಸಂ. ಕಾರ್ಯದರ್ಶಿ ಜಿ. ಗಣೇಶ್ ಮುಖ್ಯ ಅತಿಥಿಗಳಾಗಿದ್ದರು.

**ಮರು ದಿನ ಬೀಗ**

ರಾ. ಗ್ರಾ. ಉ. ಯೋಜನೆಯಲ್ಲಿ ಕಟ್ಟಲಾದ ಈ ಕಟ್ಟಡದ ಮೊದಲ ಕಂಟ್ರ್ಯಾಕ್ಟರ್ ಕೃಷ್ಣಯ್ಯ ಎಂಬವರಿಗೂ, ಅನಂತರ ಕಂಟ್ರ್ಯಾಕ್ಟ್ ವಹಿಸಿ, ಕಟ್ಟಡ ಕಟ್ಟಿಸಿದ ಕಳಸಪ್ಪ ಗೌಡ ಎಂಬವರಿಗೂ ಸಿಮೆಂಟ್, ಬಿಲ್ ಮುಂತಾದ ವಿಷಯದಲ್ಲಿ ವಿವಾದ ಇದೆಯೆಂದು ಹೇಳಲಾಗಿದ್ದು, ಇದಕ್ಕಾಗಿ ಸೆ. ೧೨ ರಂದು ಕಳಸಪ್ಪ ಗೌಡ ಕಟ್ಟಡಕ್ಕೆ ಬೀಗ ಹಾಕಿದ್ದಾರೆಂದು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಿಗೆ ಸಮಾಜದವರು ದೂರುತ್ತಿದ್ದಾರೆ.

## ಕರ್ಕೇಶ್ವರ ಸಹ|| ಸಂಘಕ್ಕೆ ಜಿ. ಲಕ್ಷ್ಮೀನಾರಾಯಣರಾವ್ ಅಧ್ಯಕ್ಷರು

ಮೇಲ್ಪಾಲು: ಇಲ್ಲಿನ ಕರ್ಕೇಶ್ವರ ವ್ಯವಸಾಯ ಸೇವಾ ಸಹಕಾರ ಸಂಘದ ಈ ಸಾಲಿನ ಅಧ್ಯಕ್ಷರಾಗಿ ಜಿ. ಲಕ್ಷ್ಮೀನಾರಾಯಣ ರಾವ್ ಆಯ್ಕೆಯಾಗಿದ್ದು, ಈ ಕೆಳಕಂಡವರು ಸದಸ್ಯರಾಗಿದ್ದಾರೆಂದು ಕಾರ್ಯದರ್ಶಿ ಹೆಚ್. ಎಸ್. ಅಶೋಕ್ ತಿಳಿಸಿದ್ದಾರೆ.

ಹೆಚ್. ಚಂದ್ರಶೇಖರ್, ಕೆ. ಜಿ. ಮಂಜಪ್ಪ, ಹೆಚ್.ಶಿವರಾಮಶೆಟ್ಟಿ, ಎನ್. ಪಿ.ವಿಶ್ವೇಶ್ವರಯ್ಯ, ಬಿ.ಟಿ.ಶಂಕ್ರಪ್ಪಗೌಡ, ಕೆ.ಟಿ.ಮಂಜಪ್ಪಗೌಡ, ಎನ್. ಎ. ಗುರುಮೂರ್ತಿ, ಸೋಮಪ್ಪ.

## ಉಚಿತ ನಿವೇಶನಗಳ ಹಕ್ಕು ಪತ್ರ ವಿತರಣೆ

ಕಲ್ಲುಗುಡ್ಡೆ: ಇಲ್ಲಿನ ವಿವೇಕಾನಂದ ರೈತ ಸಂಘದ ಆಶ್ರಯದಲ್ಲಿ ಸೆಪ್ಟೆಂಬರ್ ೨ ರಂದು ಉಚಿತ ನಿವೇಶನಗಳ ಹಕ್ಕು ಪತ್ರಗಳನ್ನು ಸಂಘದ ಅಧ್ಯಕ್ಷ ಜೆ.ಕೆ.ಶಿವಶಂಕರ್ ರವರು ವಿತರಣೆ ಮಾಡಿದರು. ಸಮಾರಂಭದ ಅಧ್ಯಕ್ಷತೆಯನ್ನು ಗ್ರಾಮಾಧ್ಯಕ್ಷ ಬಿ.ಎನ್. ವಾಸುದೇವ ಮೂರ್ತಿ ವಹಿಸಿದ್ದರು. ಗ್ರಾಮ ಲೆಕ್ಕಿಗ ರಾಮಕೃಷ್ಣ ಭಟ್ಟ ಈ ಸಂದರ್ಭದಲ್ಲಿ ಹಾಜರಿದ್ದರು.

ಸಂಘದ ಕಾರ್ಯದರ್ಶಿ ಎನ್. ಎಲ್. ಪುಂಡರೀಕ ಸ್ವಾಗತಿಸಿ, ಎಸ್. ಟಿ. ಗೋಪಾಲಕೃಷ್ಣ ವಂದಿಸಿದರು.

**(ವರದಿ: ಬಿ. ಕೆ. ಲಕ್ಷ್ಮೀನಾರಾಯಣ.)**

## ಶ್ರೀ ಕೃಷ್ಣಜಯಂತಿ ಆಚರಣೆ ಮತ್ತು ವೇದ ಶಿಕ್ಷಣ ಶಿಬಿರದ ಸಮಾರೋಪ

ಕೊಪ್ಪ: ಸೆ. ೧ ರಂದು ಇಲ್ಲಿನ ಚಿಟ್ಟಗೆರೆ ಕೃಷ್ಣಭಟ್ಟರ ವಿದ್ಯಾರ್ಥಿ ನಿಲಯದಲ್ಲಿ ಶ್ರೀ ಕೃಷ್ಣ ಜಯಂತಿಯನ್ನು ಆಚರಿಸಲಾಯಿತು. ಎನ್.ಎಸ್.ನಾಗೇಂದ್ರ ಭಟ್ಟ ಸ್ವಾಗತಿಸಿದರು. ಕು|| ಅಂಬಿಕಾ ಮತ್ತು ವೃಂದದವರು ಭಕ್ತಿಗೀತೆ ಹಾಡಿದರು. ನಿವೃತ್ತ ಪ್ರಾಂಶುಪಾಲ ನಾರಾಯಣಸ್ವಾಮಿಯವರು ಭಾಗವತದ ಮೇಲೆಯೂ ಡಾ|| ಮಲ್ಲಿಕಾರ್ಜುನ ಭಟ್ಟರು ಶ್ರೀಕೃಷ್ಣನ ವ್ಯಕ್ತಿತ್ವವನ್ನು ಕುರಿತೂ ವಿಚಾರ ಪೂರಿತವಾದ ಭಾಷಣ ಮಾಡಿದರು. ಎ. ಕೃಷ್ಣಮೂರ್ತಿ ವಂದನಾರ್ಪಣೆ ಮಾಡಿದರು.

ಸೆ. ೪ ರಂದು ಇಲ್ಲಿನ ಚಿಟ್ಟೆಮಕ್ಕಿ ದೇವಸ್ಥಾನದಲ್ಲಿ ವಯಸ್ಕ ವೇದ ಶಿಕ್ಷಣ ಶಿಬಿರದ ಸಮಾರೋಪ ಕಾರ್ಯಕ್ರಮ ನಡೆಯಿತು. ಬ್ರಾಹ್ಮಣ ಮಹಾಸಭಾ ಕಾರ್ಯದರ್ಶಿ ಎನ್. ಎಸ್. ನಾಗೇಂದ್ರ ಭಟ್ಟರು ಸಮಾರೋಪ ಭಾಷಣಮಾಡಿ ಶಿಕ್ಷಣ ಶಿಬಿರದ ಉಪಾಧ್ಯಾಯ ಎ. ಕೃಷ್ಣಮೂರ್ತಿಗಳವರಿಗೆ ಶಿಷ್ಯರ ಪರವಾಗಿ ಗೌರವವನ್ನರ್ಪಿಸಿದರು. ಎ. ಎಸ್. ರಾಘವೇಂದ್ರ ರಾವ್ ಮತ್ತು ಹೆಚ್. ಎ. ವಿಷ್ಣುಮೂರ್ತಿಗಳವರು ಮಾತನಾಡಿದರು. ಉಪಾಧ್ಯಾಯ ಎ. ಕೃಷ್ಣಮೂರ್ತಿಗಳು ಆಶೀರ್ವದಿಸಿದರು.

ಈ ಎರಡೂ ಕಾರ್ಯಕ್ರಮಗಳು ಕೊಪ್ಪ ತಾ|| ಬ್ರಾಹ್ಮಣ ಮಹಾಸಭೆಯ ಆಶ್ರಯದಲ್ಲಿ ನಡೆದವು.

# ಸೊಸೆ ಮೇಲೆ ಮಾವನ ಅತ್ಯಾಚಾರ ಯತ್ನ?

ಮೇಲುಬಿಳ್ರೆ: ಅರವತ್ತರ ಮುದುಕ ಮಾವನೊಬ್ಬ ತನ್ನ ನವ ಸೊಸೆಯ ಮೇಲೆಯೇ ಅತ್ಯಾಚಾರವೆಸಗಲು ಯತ್ನಿಸಿ ವಿಫಲನಾದ ಘಟನೆಯ ವರದಿಯೊಂದು ಇಲ್ಲಿದೆ.

ತಿಳಿದು ಬಂದಿರುವಂತೆ, ಮೇಲುಬಿಳ್ರೆ ಗ್ರಾಮದ ಕೆರೆಕೊಡಿಗೆಯ ಬುಳ್ಳಿನಾಯ್ಕ ಎಂಬವನು ತನ್ನ ಸೊಸೆ ಜಯಮ್ಮನನ್ನು ಬಯಸಿ. ಆಕೆ ಒಪ್ಪದಿದ್ದಾಗ ಬಲಾತ್ಕರಿಸಿ ವಿಫಲನಾದ. ಈ ವಿಷಯವನ್ನು ಜಯಮ್ಮ ತನ್ನ ಗಂಡನಿಗೆ ತಿಳಿಸಿ, ತಂದೆ-ಮಗನಲ್ಲಿ ವಿರಸ ಬೆಳೆಯಿತಾದರೂ ಬುದ್ಧಿವಂತನಾದ ತಂದೆ ಮಗನನ್ನು ಮಾತಿನಲ್ಲೇ ಮರುಳು ಮಾಡಿ "ಜಯಮ್ಮಳೇ ತನ್ನನ್ನು ಬಯಸಿದಳು. ನಾನು ಅದಕ್ಕೆ ಒಪ್ಪಲಿಲ್ಲ" ಎಂದು ನಂಬಿಸಿದನು.

ಅಂದಿನಿಂದ ಮನೆಯಲ್ಲಿ ಜಯಮ್ಮನಿಗೆ ಕಿರುಕುಳ ಆರಂಭವಾಗಿ ಎಷ್ಟರ ಮಟ್ಟಿಗೆ ಹೋಯಿತೆಂದರೆ, ಮಲಗಲು ಮನೆಯಲ್ಲಿ ಜಾಗ ಕೊಡದೆ ದನದ ಕೊಟ್ಟಿಗೆಯಲ್ಲಿ, ಬಚ್ಚಲ ಮನೆಯಲ್ಲಿ ಮಲಗಿ ಸೊಳ್ಳೆಕಾಟದಿಂದ, ಚಳಿಯಿಂದ ನರಕಯಾತನೆ ಅನುಭವಿಸಿದ್ದನ್ನು ನೋಡಿದ್ದಾಗಿ ಪ್ರತ್ಯಕ್ಷ ದರ್ಶಿಗಳು ಹೇಳುತ್ತಾರೆ. ಜೊತೆಗೆ 'ಆಹಾರದಲ್ಲಿ ಒಮ್ಮೆ ವಿಷ ಬೆರೆಸಿ ಕೊಟ್ಟಿದ್ದು ಅದು ತನಗೆ ಮೊದಲೇ ಗೊತ್ತಾಗಿದ್ದರಿಂದ ಸಾವಿನಿಂದ ಪಾರಾದೆ' ಎಂದು ಜಯಮ್ಮ ಹೇಳುತ್ತಾರೆ.

ಇದನ್ನು ತಿಳಿದ ಜಯಮ್ಮನ ತಂದೆ ತಾಯಿಯರು ಬಂದು, ಊರವರೊಂದಿಗೆ ಪಂಚಾಯತಿ, ಮಾಡಿಸಿ ಅದೂ ವಿಫಲವಾದಾಗ ಪೋಲೀಸರ ಮೊರೆ ಹೋಗಿದ್ದಾರೆಂದೂ, ಜಯಮ್ಮ ಈಗ ತೌರು ಮನೆಯಲ್ಲಿ ಸುರಕ್ಷಿತವಾಗಿ ಇದ್ದಾರೆಂದೂ ತಿಳಿದು ಬಂದಿದೆ.

## ಬಿಲಗದ್ದೆ ರೈತ ಸಂಘ

ಬಿಲಗದ್ದೆ: ತಾ| ರೈತ ಸಂಘದ ಅಧ್ಯಕ್ಷ ಮಳಿಗೆ ಚಂದ್ರಶೇಖರ್, ಕಾರ್ಯದರ್ಶಿ ಜಿ. ಡಿ. ಪರಮೇಶ್ವರ ಇವರ ನೇತೃತ್ವದಲ್ಲಿ ನಡೆದ ಇಲ್ಲಿನ ರೈತ ಸಭೆಯಲ್ಲಿ ಕೆಳಕಂಡವರನ್ನು ಪದಾಧಿಕಾರಿಗಳಾಗಿ ಆರಿಸಲಾಯಿತು: ಹೆಚ್. ವಿ. ಶಿವಪ್ಪಗೌಡ (ಅಧ್ಯಕ್ಷ), ಟಿ. ಎನ್. ರವಿ (ಉಪಾಧ್ಯಕ್ಷ), ಹೆಚ್.ಜಿ. ಶ್ರೀರಮಣ ರಾವ್ (ಕಾರ್ಯದರ್ಶಿ), ಎಸ್. ಸಿ. ಶಂಕರಪ್ಪ (ಸಹಕಾರ್ಯದರ್ಶಿ), ಸಿದ್ದಪ್ಪ ಗೌಡ (ಖಜಾಂಚಿ) ಮತ್ತು ೧೦ ಜನರ ಕಾರ್ಯಕಾರಿ ಸಮಿತಿ.

## ವ್ಯವಸಾಯ ಸೇವಾ ಸಹಕಾರ ಸಂಘದ ಅಧ್ಯಕ್ಷರಾಗಿ ಕೆ.ಎಸ್. ಧರ್ಮೇಗೌಡ

ಕೊಪ್ಪ: ಇಲ್ಲಿನ ವ್ಯವಸಾಯ ಸೇವಾ ಸಹಕಾರ ಸಂಘದ ಅಧ್ಯಕ್ಷ ಸ್ಥಾನಕ್ಕೆ ಸೆ. ೧೪ ರಂದು ನಡೆದ ಚುನಾವಣೆಯಲ್ಲಿ ಗುಣವಂತಿಯ ಕೆ. ಎಸ್. ಧರ್ಮೇಗೌಡರು ಬಡ್ಡಿಗೆಯ ಬಿ.ಆರ್. ಪರಮೇಶ್ವರ ಅವರನ್ನು ಸೋಲಿಸಿ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್.
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ